**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 111 (231) |
| ಸದಸ್ಯರ ಹೆಸರು | : | ಶ್ರೀ. ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 13.09.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿರುವ ಸರ್ಕಾರಿ ಮತ್ತು ಅನುದಾನಿತ "ಪ್ರಾಥಮಿಕ ಮತ್ತು ಪ್ರೌಢಶಾಲೆ"ಗಳಲ್ಲಿ ಪ್ರಸ್ತುತ ಖಾಲಿ ಇರುವ ದೈಹಿಕ ಶಿಕ್ಷಕರು ಹಾಗೂ ಚಿತ್ರಕಲಾ ಶಿಕ್ಷಕರ ಮತ್ತು ಸಂಗೀತ ಶಿಕ್ಷಕರುಗಳ ಸಂಖ್ಯೆ ಎಷ್ಟು;</td><td>ರಾಜ್ಯದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ<br>ಖಾಲಿ ಇರುವ ಶಿಕ್ಷಕರ ಸಂಖ್ಯೆಯ ವಿವರ ಈ ಕೆಳಕಂಡಂತಿದೆ
<table>
<tr><th></th><th colspan="2">ಬೆಂಗಳೂರು & ಮೈಸೂರು ವಿಭಾಗ</th><th colspan="2">ಕಲಬುರಗಿ ವಿಭಾಗ</th><th colspan="2">ಧಾರವಾಡ ವಿಭಾಗ</th></tr>
<tr><th></th><th>ಪ್ರಾಥಮಿಕ</th><th>ಪ್ರೌಢ</th><th>ಪ್ರಾಥಮಿಕ</th><th>ಪ್ರೌಢ</th><th>ಪ್ರಾಥಮಿಕ</th><th>ಪ್ರೌಢ</th></tr>
<tr><td>ಚಿತ್ರಕಲಾ ಶಿಕ್ಷಕರು</td><td>72</td><td>340</td><td>01</td><td>101</td><td>03</td><td>72</td></tr>
<tr><td>ಸಂಗೀತ ಶಿಕ್ಷಕರು</td><td>82</td><td>451</td><td>04</td><td>23</td><td>01</td><td>17</td></tr>
<tr><td>ದೈಹಿಕ ಶಿಕ್ಷಣ ಶಿಕ್ಷಕರು</td><td>957</td><td>808</td><td>644</td><td>250</td><td>731</td><td>145</td></tr>
</table>
ರಾಜ್ಯದ ಅನುದಾನಿತ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ<br>ರಾಜ್ಯದಲ್ಲಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ದೈಹಿಕ ಶಿಕ್ಷಕರ ಒಟ್ಟು 76 ಹುದ್ದೆಗಳು ಹಾಗೂ ಅನುದಾನಿತ ಪ್ರೌಢಶಾಲೆಗಳಲ್ಲಿ ಒಟ್ಟು 734 ಹುದ್ದೆಗಳು ಖಾಲಿ ಇರುತ್ತವೆ. ಕರ್ನಾಟಕ ಶಿಕ್ಷಣ ಕಾಯ್ದೆಯ 1983ರ ನಿಯಮ 1999ರ ಅನೆಕ್ಷರ್ 4ರಲ್ಲಿನ ಸಿಬ್ಬಂದಿ ಮಾದರಿ ರಚನಾ ಕ್ರಮದಂತೆ ವೃತ್ತಿ ಶಿಕ್ಷಕರು ಮತ್ತು ಚಿತ್ರಕಲಾ ಶಿಕ್ಷಕರ ಹುದ್ದೆಗಳನ್ನು ಹೊರತುಪಡಿಸಲಾಗಿದೆ.</td></tr>
<tr><td>ಆ.</td><td>ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ;</td><td rowspan="2">ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ<br>ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಖಾಲಿಯಿರುವ ದೈಹಿಕ ಶಿಕ್ಷಕರು, ಚಿತ್ರಕಲಾ ಶಿಕ್ಷಕರು ಮತ್ತು ಸಂಗೀತ ಶಿಕ್ಷಕರುಗಳ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಆರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯ ಸಡಿಲಗೊಂಡ ನಂತರ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಿಳಿಸಿರುತ್ತದೆ.<br>ರಾಜ್ಯದ ಅನುದಾನಿತ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ<br>ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ 280 ಇದ್ದಲ್ಲಿಅಂತಹ ಶಾಲೆಗಳಿಗೆ ದೈಹಿಕ ಶಿಕ್ಷಣ ಶಿಕ್ಷಕರನ್ನು ನೇಮಿಸಲು ಅವಕಾಶವಿರುತ್ತದೆ. ಆದರೆ, ರಾಜ್ಯದಲ್ಲಿ ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರು ಇರುತ್ತಾರೆ. ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 267 ಪಿಎಂಸಿ 2007, ದಿನಾಂಕ:12-10-2007ರಲ್ಲಿರುವಂತೆ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರು ಇರುವುದರಿಂದ ಅವುಗಳಲ್ಲಿನ ಅನುದಾನಿತ ಹುದ್ದೆಗಳು ಖಾಲಿಯಾದಲ್ಲಿ ಅಥವಾ ಒಂದು ಖಾಸಗಿ ಪ್ರಾಥಮಿಕ ಶಾಲೆಯನ್ನು ಸಹಾಯಾನುದಾನಕ್ಕೆ ಒಳಪಡಿಸಿದ</td></tr>
<tr><td>ಇ.</td><td>ಹಾಗಿದ್ದಲ್ಲಿ, ಸದರಿ ಪ್ರಕ್ರಿಯೆಯನ್ನು ಯಾವಾಗ ಪ್ರಾರಂಭಿಸಲಾಗುವುದು;</td></tr>
</table>

| | | |
|---|---|---|
| | | ಪ್ರಥಮ ಸಂದರ್ಭದಲ್ಲಿ ಕೆಲವು ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸದೇ ಉಳಿದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಹೆಚ್ಚುವರಿ ಶಿಕ್ಷಕರುಗಳಿಂದ ತುಂಬಿಕೊಳ್ಳಬೇಕೆ ಹೊರತು ನೇರ ನೇಮಕಾತಿ ಮಾಡಿಕೊಳ್ಳತಕ್ಕದ್ದಲ್ಲ ಎಂದು ಸೂಚಿಸಲಾಗಿದ್ದು, ಸದರಿ ಸುತ್ತೋಲೆಯನ್ವಯ ಕ್ರಮವಹಿಸಲಾಗುವುದು.<br><br>**ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ**<br><br>ಆಯುಕ್ತರ ಕಛೇರಿ ಪತ್ರ ಸಂಖ್ಯೆ:ಸಿ4(1)ಸ.ಪ್ರೌ.ಶಾ/ಹು.ಭ. ಅನು.01/2018–19 ದಿನಾಂಕ:30.05.2018, 18.02.2019 ರನ್ವಯ ಒಟ್ಟು 5500 ಖಾಲಿ ಇರುವ ಹುದ್ದೆಗಳಲ್ಲಿ ಭರ್ತಿ ಇದರಲ್ಲಿ ಚಿತ್ರಕಲಾ ಶಿಕ್ಷಕರ ಒಟ್ಟು 339, ಸಂಗೀತ ಶಿಕ್ಷಕರ ಒಟ್ಟು 130, ದೈಹಿಕ ಶಿಕ್ಷಣ ಶಿಕ್ಷಕರ ಒಟ್ಟು 331 ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದು, ಆರ್ಥಿಕ ಇಲಾಖೆಯು ಕೆಲವೊಂದು ಅಂಶಗಳ ಬಗ್ಗೆ ಮಾಹಿತಿ ಕೋರಿದ್ದು, ಸದರಿ ಮಾಹಿತಿಯನ್ನು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಂದ ಪಡೆದು ಆರ್ಥಿಕ ಇಲಾಖೆಯ ಸಹಮತಿ ನಂತರ ಹುದ್ದೆಗಳನ್ನು ಭರ್ತಿ ಮಾಡಲು ಪರಿಶೀಲಿಸಲಾಗುವುದು.<br><br>**ರಾಜ್ಯದ ಅನುದಾನಿತ ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ**<br><br>ರಾಜ್ಯ ಅನುದಾನಿತ ಪ್ರೌಢಶಾಲೆಗಳಲ್ಲಿನ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು ಆರ್ಥಿಕ ಮಿತವ್ಯಯ ಸಡಿಲಗೊಂಡ ನಂತರ ಪರಿಶೀಲಿಸಲಾಗುವುದು ಹಾಗೂ ಅನುದಾನಿತ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ, ದಿನಾಂಕ:31/12/2015ರ ಪೂರ್ವದಲ್ಲಿ ನಿವೃತ್ತಿ ರಾಜೀನಾಮೆ, ಮರಣ ಕಾರಣಗಳಿಂದಾಗಿ ಖಾಲಿಯಾದ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಈ. | ಇಲ್ಲವಾದಲ್ಲಿ, ಸದರಿ ಸಂಸ್ಥೆಗಳನ್ನು ಅನುದಾನಕ್ಕೊಳಪಡಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು? | **ರಾಜ್ಯದ ಸರ್ಕಾರಿ ಪ್ರಾಥಮಿಕಶಾಲೆಗಳಿಗೆ ಸಂಬಂಧಿಸಿದಂತೆ**<br>ಪ್ರಶ್ನೆ ಉದ್ಭವಿಸುವುದಿಲ್ಲ.<br><br>**ರಾಜ್ಯದ ಅನುದಾನಿತ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ**<br>ಕ್ರ.ಸಂ.[ಅ]ರಲ್ಲಿ ವಿವರಿಸಲಾಗಿದೆ.<br><br>**ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ**<br>ಪ್ರಶ್ನೆ ಉದ್ಭವಿಸುವುದಿಲ್ಲ.<br><br>**ರಾಜ್ಯದ ಅನುದಾನಿತ ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ**<br>ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |

**ಸಂಖ್ಯೆ: ಇಪಿ 66 ಎಲ್‌ಬಿಪಿ 2021**

(ಬಿ.ಸಿ. ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ

ಸಚಿವರು